# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 453 (531) |
| ಮಾನ್ಯ ಸದಸ್ಯರ ಹೆಸರು | ಶ್ರೀ ವಿಜಯಸಿಂಗ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 09/03/2020 |
| ಉತ್ತರಿಸಬೇಕಾದ ಸಚಿವರು | ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| (ಅ) | ಬೀದರ್ ಜಿಲ್ಲೆಯಲ್ಲಿ ಬೀದರ್ ಬ್ರೀಮ್ಸ್ ಬೋಧಕ ಆಸ್ಪತ್ರೆಯ ಕಟ್ಟಡ ಕಾಮಗಾರಿ ಕಳಪೆಯಾಗಿರುವ ಬಗ್ಗೆ ದೂರುಗಳು ಕೇಳಿ ಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಕಟ್ಟಡ ಕಾಮಗಾರಿಗೆ ನೀಡಿದ ಅನುದಾನ ಎಷ್ಟು; ಅನುದಾನವನ್ನು ದುರುಪಯೋಗಿಸಿದ ಅಧಿಕಾರಿಗಳ ಮೇಲೆ ಕೈಗೊಂಡ ಕ್ರಮಗಳೇನು; | ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬೀದರಿನ ಜಿಲ್ಲಾ ಆಸ್ಪತ್ರೆಯನ್ನು 300 ರಿಂದ 750 ಹಾಸಿಗೆಗಳ ಸಾಮರ್ಥ್ಯಕ್ಕೆ ಹೆಚ್ಚಿಸಿ ಮೇಲ್ದರ್ಜೆಗೇರಿಸಲು ನಿರ್ಮಿಸಲಾದ ಕಟ್ಟಡ ಕಾಮಗಾರಿಗಾಗಿ ಒಟ್ಟು ರೂಪಾಯಿ 110.00 ಕೋಟಿ ಅನುದಾನ ಬಿಡುಗಡೆಯಾಗಿದ್ದು, ಅದರಲ್ಲಿ ರೂ.95.75 ಕೋಟಿ ಮಾತ್ರ ಪಾವತಿಸಲಾಗಿದೆ.<br><br>ಕಟ್ಟಡ ಕಾಮಗಾರಿಗೆ ಸಂಬಂಧಿಸಿದಂತೆ ದೂರುಗಳು ಬಂದ ಹಿನ್ನೆಲೆಯಲ್ಲಿ ಮುಖ್ಯ ಅಭಿಯಂತರರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಇಂಜಿನಿಯರಿಂಗ್ ಘಟಕ ಇವರನ್ನು ಒಳಗೊಂಡಂತೆ ತನಿಖಾ ಸಮಿತಿಯನ್ನು ರಚಿಸಲಾಗಿತ್ತು. ಸದರಿ ಸಮಿತಿಯು ಸಲ್ಲಿಸಿರುವ ವರದಿಯಲ್ಲಿ ಕಟ್ಟಡದ ಮುಖ್ಯ ಸ್ಟ್ರಕ್ಚರ್ ದೃಢವಾಗಿ (Stable) ಹಾಗೂ ಯಥಾವತ್ತಾಗಿದ್ದು (Intact) ಕಟ್ಟಡ ಎಲ್ಲಿಯೂ ಕುಸಿದಿರುವುದಿಲ್ಲ. ಆಸ್ಪತ್ರೆ ಕಟ್ಟಡದ ನಿರ್ವಹಣೆಯಲ್ಲಿ ಕೆಲವು ನ್ಯೂನ್ಯತೆಗಳಿರುವುದಾಗಿ ವರದಿಸಲಾಗಿದೆ. ಇದನ್ನು ಸರಿಪಡಿಸಲು ಕ್ರಮ ಕೈಗೊಳ್ಳುವಂತೆ ಸಂಬಂಧಿಸಿದ ಗುತ್ತಿಗೆದಾರರಿಗೆ ಸಂಸ್ಥೆಯ ವತಿಯಿಂದ ನೋಟೀಸ್ ನೀಡಲಾಗಿರುತ್ತದೆ.<br><br>ಕಟ್ಟಡ ಕಾಮಗಾರಿ ಮುಗಿದ ಮೇಲೆ ವಿದ್ಯುತ್ ಲೈನ್ ಮತ್ತು ಫೈರ್ ಫೈಟಿಂಗ್ ಪೈಪ್ ಲೈನ್ ಅಳವಡಿಸಲು ಡ್ರಿಲ್ಲಿಂಗ್ ಯಂತ್ರ ಮುಖಾಂತರ ರಂಧ್ರಗಳು ಕೊರೆಯುವ ಸಮಯದಲ್ಲಿ ಉಂಟಾದ ವೈಬ್ರೇಷನ್ ನಿಂದ ಸ್ವಲ್ಪ ಮಟ್ಟದ ಸೀಲಿಂಗ್ ಪ್ಲಾಸ್ಟರ್ (ಗಿಲಾವಾ)ನಲ್ಲಿ ಸೇರಿರುವ ವ್ಯಾಕ್ಯೂಮ್ ಬಿಡುಗಡೆಯಾಗಿರುವುದರಿಂದ ಸ್ಥಳದ ಪ್ಲಾಸ್ಟರ್ ಕಳಚಿ ಬಿದ್ದಿರುತ್ತದೆ. ಈಗಾಗಲೇ ಬಿದ್ದಿರುವ ಪ್ಲಾಸ್ಟರ್ ಅನ್ನು ದುರಸ್ತಿ ಮಾಡಿಸಲಾಗಿದೆ ಹಾಗೂ ಉತ್ತರಕ್ಕಿರುವ ಪೋರ್ಟಿಕೋ ಇಳಿಜಾರು ಆರ್.ಸಿ.ಸಿ ಪ್ಯಾರಾಪೆಟ್ ನಲ್ಲಿ ಹೆಚ್ಚಾಗಿ, ಮಳೆ ನೀರಿನ ಶೇಖರಣೆ ಉಂಟಾಗುತ್ತಿದ್ದರಿಂದ, ಅದನ್ನು ತೆಗೆದುಹಾಕಿ ಹೊಸದಾಗಿ ಕ್ಯಾನೋಪಿ ತೊಲೆಗಳ ನೇರಕ್ಕೆ ಇಟ್ಟಿಗೆ ಕಟ್ಟಡ ನಿರ್ಮಾಣವನ್ನು ಕೈಗೊಂಡಿದ್ದು, ಸದರಿ ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| ಇ) | ಕಟ್ಟಡದ ಕಳಪೆ ಕಾಮಗಾರಿಯನ್ನು ಸರಿಪಡಿಸಲು ಸರ್ಕಾರ ಕೈಗೊಂಡ ಕ್ರಮವೇನು? | |

ಸಂ: ಎಂಇಡಿ 79 ಎಂ ಎಸ್ ಎಫ್ 2020

(ಡಾ: ಕೆ. ಸುಧಾಕರ್)
ವೈದ್ಯಕೀಯ ಶಿಕ್ಷಣ ಸಚಿವರು